ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಮೆಟ್ರೋ ರೈಲು ನಿಗಮದ ಗುತ್ತಿಗೆ ನೌಕರರ ಪದೋನ್ನತಿಯ ಬಗ್ಗೆ

ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ (ಪದವೀಧರರ ಕ್ಷೇತ್ರ) :-

708 (1003) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೆಂಗಳೂರು ಮೆಟ್ರೋ ರೈಲು ನಿಗಮದ ಕಾರ್ಯಾಚರಣೆ ನಿರ್ವಹಣೆ ಮತ್ತು ಮಾನವ ಸಂಪನ್ಮೂಲ ಹಾಗೂ ಯೋಜನಾ (Project) ವಿಭಾಗದ ಗುತ್ತಿಗೆ ಮತ್ತು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ನೌಕರರ ಸಂಖ್ಯೆ ಎಷ್ಟು ; ಅವರುಗಳ ಹೆಸರು, ಹುದ್ದೆಯ ಪದನಾಮ, ನಿಗಮಕ್ಕೆ ಸೇರಿದ ದಿನಾಂಕ, ಪಡೆಯುತ್ತಿರುವ ವೇತÀನ, ಮಾತೃ ಇಲಾಖೆಯ ಮಾಹಿತಿಗಳೊಂದಿಗೆ ನೀಡುವುದು ;

(ಆ) ಯೋಜನಾ (Project) ವಿಭಾಗದಲ್ಲಿ ಮೊದಲು ಒಂದು ಹುದ್ದೆಗೆ ಗುತ್ತಿಗೆಯಡಿ ನೇಮಕಾತಿ ಹೊಂದಿ ತದನಂತರ ರಾಜೀನಾಮೆ ನೀಡಿ ನಂತರ ಅದೇ ಅಭ್ಯರ್ಥಿ ಉನ್ನತ ಹುದ್ದೆಗೆ ನೇಮಕವಾಗುತ್ತಿರುವುದು ನಿಜವೇ ; ಈ ರೀತಿ ಈಗಾಗಲೇ ಎಷ್ಟು ಜನರನ್ನು ಪುನಃ ನೇಮಿಸಿ (Rejoin) ಕೊಳ್ಳಲಾಗಿದೆ; ವೇತನದೊಂದಿಗೆ ವಿವರವಾದ ಮಾಹಿತಿ ನೀಡುವುದು ;

(ಇ) ಗುತ್ತಿಗೆ ನೌಕರರಿಗೆ 6 ತಿಂಗಳಿಂದ 1 ವರ್ಷದ ಒಳಗೆ ಉನ್ನತ ಹುದ್ದೆಗೆ ಪದೋನ್ನತಿ ನೀಡುತ್ತಿದ್ದು, ನಿಗಮದ ಖಾಯಂ ನೌಕರರಿಗೆ ಇಲ್ಲಿಯವರೆಗೂ ಪದೋನ್ನತಿ ನೀಡದಿರಲು ಕಾರಣಗಳೇನು ; (ವಿವರವಾದ ಮಾಹಿತಿ ನೀಡುವುದು)

(ಈ) ಗುತ್ತಿಗೆ ನೌಕರರಿಗೆ (Rejoin) ಮಾಡಿಕೊಂಡ ಪದೋನ್ನತಿ ನೀಡಲು ನಿಯಮಗಳಲ್ಲಿ ಅವಕಾಶವಿದೆಯೇ ; ಇದಕ್ಕೆ ಯಾವುದೇ ನೀತಿ ನಿಯಮಗಳಿಲ್ಲವೆ ; ಖಾಯಂ ನೌಕರರಿಗೆ ಪದೋನ್ನತಿ ನೀಡಿದರೆ ಆರ್ಥಿಕ ಹೊರೆಯಾಗುತ್ತದೆಯೇ ? (ವಿವರವಾದ ಮಾಹಿತಿ ನೀಡುವುದು)